## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 885(970)

ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 20.09.2021

ಉತ್ತರಿಸುವವರು : ಮಾನ್ಯ ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ವನ್ಯಜೀವಿಗಳು ಊರಿಗೆ, ಹೊಲಗದ್ದೆಗಳಿಗೆ ನುಗ್ಗಿ ರೈತರ ಜಾನುವಾರುಗಳನ್ನು (ಹಸು, ಆಡು, ಕುರಿ ಇತ್ಯಾದಿ) ಬೇಟೆಯಾಡಿ ಸಾಯಿಸುತ್ತಿರುವ ಪ್ರಕರಣಗಳು ಹೆಚ್ಚಾಗುತ್ತಿರುವುದು ಗಮನಕ್ಕೆ ಬಂದಿದೆಯೇ; ಕಳೆದ ಒಂದು ವರ್ಷದಲ್ಲಿ ಎರಡು ಜಿಲ್ಲೆಗಳಲ್ಲಿ ಎಷ್ಟು ಪ್ರಕರಣಗಳು ವರದಿಯಾಗಿದೆ; ಸಾವಿಗೀಡಾದ ಜಾನುವಾರುಗಳ ಸಂಖ್ಯೆ ಎಷ್ಟು; | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಕಳೆದ ಒಂದು ವರ್ಷದಲ್ಲಿ **"ಇ-ಪರಿಹಾರ"** ತಂತ್ರಾಂಶದಲ್ಲಿ ಸ್ವೀಕೃತವಾದ ವನ್ಯಜೀವಿಗಳಿಂದ ಸಾಕುಪ್ರಾಣಿ ಪ್ರಾಣಹಾನಿ ವಿವರ ಈ ಕೆಳಕಂಡಂತಿದೆ:- (ಕೆಳಗಿನ ಕೋಷ್ಟಕ ನೋಡಿ) |
| ಆ | ವನ್ಯಜೀವಿಗಳಿಂದ ಜಾನುವಾರು ಹತ್ಯೆ ಪ್ರಕರಣಗಳಲ್ಲಿ ಸರ್ಕಾರದಿಂದ ನೀಡುತ್ತಿರುವ ಪರಿಹಾರದ ಪ್ರಮಾಣ ಎಷ್ಟು; ಇದುವರೆಗೆ ಮೇಲ್ಕಂಡ ಎಲ್ಲಾ ಪ್ರಕರಣಗಳಲ್ಲಿ ರೈತರಿಗೆ ಪರಿಹಾರ ಧನ ಮಂಜೂರು ಮಾಡಿ ವಿತರಣೆ ಮಾಡಲಾಗಿದೆಯೇ? | ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗುವ ಸಾಕುಪ್ರಾಣಿ ಹತ್ಯೆ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ: ಅಪಜೀ-109-ಎಫ್‌ಎಪಿ-2014, ದಿನಾಂಕ: 13/08/2014ರನ್ವಯ ಕುರಿ, ಮೇಕೆ ಮೃತಪಟ್ಟಲ್ಲಿ ರೂ.5,000/-ಗಳ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದೆ.<br><br>ವನ್ಯಪ್ರಾಣಿ ದಾಳಿಯಿಂದ ಹಸು, ಎತ್ತು, ಎಮ್ಮೆ ಮತ್ತು ಕೋಣ ಮೃತಪಟ್ಟಲ್ಲಿ ಸರ್ಕಾರದ ಆದೇಶ ಸಂಖ್ಯೆ: ಅಪಜೀ 144 ಎಫ್‌ಎಪಿ 2020, ದಿನಾಂಕ: 20.04.2021ರನ್ವಯ ಎಸ್.ಡಿ.ಆರ್.ಎಫ್ (State Disaster Reponse Fund) ರಲ್ಲಿನ ದರಗಳಂತೆ 2021-22ನೇ ಸಾಲಿನಿಂದ ಜಾರಿಗೆ ಬರುವಂತೆ ರೂ.30,000/-ಗಳ ಗರಿಷ್ಠ ಮೊತ್ತದ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದೆ.<br><br>ಕಳೆದ ಒಂದು ವರ್ಷದಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ದಯಾತ್ಮಕ ಧನ ಪಾವತಿಸಲು ಅರ್ಜಿಗಳನ್ನು ಕಡ್ಡಾಯವಾಗಿ **"ಇ-ಪರಿಹಾರ"** ತಂತ್ರಾಂಶದಲ್ಲಿ ಸ್ವೀಕರಿಸಲಾಗುತ್ತಿದ್ದು, ಈ ರೀತಿ ಸ್ವೀಕೃತವಾದ ಪ್ರಕರಣಗಳಿಗೆ ಕೂಡಲೇ ನಿಯಮಾನುಸಾರ ಪರಿಶೀಲಿಸಿ, ದಯಾತ್ಮಕ ಧನವನ್ನು ಪಾವತಿಸಲಾಗಿದೆ. |

| ಕ್ರ. ಸಂ | ವರ್ಷ | ಸಾಕುಪ್ರಾಣಿ ಹತ್ಯೆ ಪ್ರಕರಣ | |
|---|---|---|---|
| | | ಚಾಮರಾಜನಗರ | ಮೈಸೂರು |
| 1 | 2020-21 | 246 | 490 |
| 2 | 2021-22 | 133 | 230 |

ಸಂಖ್ಯೆ: ಅಪಜೀ 187 ಎಫ್‌ಡಬ್ಲ್ಯೂಎಲ್ 2021

(ಉಮೇಶ್ ವಿ ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು